6. The user agency shall pay the extraction charges as calculated by the Deputy Conservation of Forests, Chitradurga.
7. The user agency shall deposit funds for raising compensatory plantations at the rate of prevailing at the time of sanction (At present it is Rs.54,200.00 per ha)
8. The Karnataka Forest Act, 1963 and Rules, 1969 will be applicable for violation.
9. Any other conditions to be imposed by the Government of India/State Government/Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

PR-1421

**S. R. VATSALA**

Under Secretary to Government,
Forest, Ecology & Environment Department.

**Subject :** Constitution of a Committee to monitor process of Rehabilitation of the displaced Tribal families-Nomination of the representative of Government of India, Ministry of Environment and Forests.

**Read :**
1. Government Order No. FEE 84 FLL 2003, dated: 8.8.2003
2. Government letter of even number dated: 8.8.2003
3. Letter No. 8-24/2003-FC, dated: 3.10.2003 of Government of India, Ministry of Environment and Forests, New Delhi.

**Preamble:**

Government vide its order dated: 8.8.2003 read at (1) above has constituted a committee to monitor the rehabilitation of displaced tribal families displaced due to formation of Bandipur National Park and construction of Kabini Reservoir in Mysore District. This committee consists of one Chairman and 7 Members. Amongst which one shall be the representative of Government of India, Ministry of Environment and Forests (to be nominated by the Government of India).

In Government letter Dated: 8.8.2003 read at (2) the Government of India was requested to suggest a representative of Government of India, Ministry of Environment and Forests for nomination in the committee.

Accordingly, Government of India, Ministry of Environment and Forests, New Delhi vide their letter dated: 3.10.2003 read at (3) above has suggested the Deputy Conservator of Forests (Central), Ministry of Environment and Forests, Regional Office, Bangalore as a representative of Government of India, Ministry of Environment and Forests for the committee constituted vide Government Order dated: 8.8.2003 read at (1) above. Hence, the order.

**Government Order No. FEE 84 FLL 2003, Bangalore, Dated: 30th October 2003.**

In the circumstances explained above in the preamble, Government are pleased to nominate the Deputy Conservator of Forests (Central), Government of India, Ministry of Environment and Forests, Regional Office (South Zone), Bangalore as a representative of Government of India, Ministry of Environment and Forests for the committee constituted to monitor the rehabilitation of displaced tribal families of Bandipur National Park and construction of Kabini Reservoir, in Mysore District.

By Order and in the Name of the Governor of Karnataka,

PR-1422

**S. R. VATSALA**

Under Secretary to Government,
Forest, Ecology & Environment Department.

**ADDENDUM**

**No:FEE 335 FGL 2001, Bangalore, Dated: 29th October 2003**

In Government Order No. FEE 335 FGL 2001, dated: 1.8.2002 in the Order portion after serial No. 4 of the following Sl. No. 5 and 6 shall be inserted.

5. Deputy Conservator of Forests, (Working Plan) Covering the district. Member
6. Forest Settlement Officer (S), of the District. Member

By Order and in the Name of the Governor of Karnataka,

PR-1423

**K. N. GAYATHRI**

Under Secretary to Government,
Forest, Ecology & Environment Department.

**ಇಂಧನ ಸಚಿವಾಲಯ**

**ವಿಷಯ :** ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಮಂದಗೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಟಾನ ಮಾಡಲು ಕಾಲಾವಕಾಶ ವಿಸ್ತರಿಸುವ ಬಗ್ಗೆ - ಆದೇಶ.

**ಓದಲಾಗಿದೆ :**
1. ದಿನಾಂಕ: 16.5.2001 ರಂದು ಮೆಸರ್ಸ್ ಅಂಜನ್ ಪವರ್ ಪ್ರೈವೇಟ್ ಲಿಮಿಟೆಡ್, ಕಂಪೆನಿಯವರು ಮಂದಗೆರೆ ಕಿರು ಜಲ ವಿದ್ಯುತ್ ಯೋಜನೆಗಾಗಿ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆ.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 1 ಎನ್‌ಸಿಇ 2002, ದಿನಾಂಕ: 15.1.2002.
3. ಸರ್ಕಾರಿ ಆದೇಶ ಸಂಖ್ಯೆ: ಇಂಇ 1 ಎನ್‌ಸಿಇ 2002, ದಿನಾಂಕ: 28.1.2003.

4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಮಂದಗೆರೆ/2003/1665, ದಿನಾಂಕ: 20/21.10.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಒಡಂಬಡಿಕೆಯಲ್ಲಿ ಮೆಸರ್ಸ್ ಅಂಜನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯು 1 ಮೆಗಾ ವ್ಯಾಟ್ ಸಾಮರ್ಥ್ಯದ ಮಂದಗೆರೆ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನ ನಿಟ್ಟಿನಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಂಡಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾದ ಸಾಮರ್ಥ್ಯವನ್ನು 1 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

3. ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ: 8.7.2002ರ ತೀರ್ಪಿನ ಪ್ರಕಾರ ಮೆಸರ್ಸ್ ಅಂಜನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಯು ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಯೊಂದಿಗೆ ವಿಲೀನವಾಗಿರುವುದನ್ನು ದೃಢಪಡಿಸಲಾಗಿದೆ.

4. ಸದರಿ ಯೋಜನೆಯನ್ನು ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಗೆ ಅನುಷ್ಠಾನ ಮಾಡಲು ಕಾಲಾವಕಾಶವನ್ನು ಡಿಸೆಂಬರ್ 2004ರವರೆಗೆ ವಿಸ್ತರಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

5. ಆದ್ದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಇಂಇ 234 ಎನ್‌ಸಿಇ 2003, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಕೆ. ಆರ್. ಪೇಟೆ ತಾಲ್ಲೂಕಿನ ಮಂದಗೆರೆ ಗ್ರಾಮದ ಮಂದಗೆರೆ ಅಣೆಕಟ್ಟಿನಲ್ಲಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಮಂದಗೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 31.12.2004 ರವರೆಗೆ ವಿಸ್ತರಿಸಲಾಗಿದೆ. ಹಂಚಿಕೆಯ ಇತರ ಷರತ್ತುಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಪಿ. ಆರ್. 1424 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಕೆ. ರಾಮೇಶ್ವರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಮೈಸೂರು ಅವರ ವಿರುದ್ಧ ಶಿಸ್ತು ಕ್ರಮ- ಅಮಾನತ್ತುಪಡಿಸಿ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 31 ಆಇಸೇ 2003, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003**

ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಉಪನಿರ್ದೇಶಕರಾಗಿ ಮೈಸೂರಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ. ರಾಮೇಶ್ವರಪ್ಪ ಅವರು 1999ರ ಸಾಲಿನಲ್ಲಿ ಗ್ರೂಪ್ ಎ ಮತ್ತು ಬಿ ವರ್ಗದ ಹುದ್ದೆಗಳಿಗಾಗಿ ಕರ್ನಾಟಕ ಲೋಕಸೇವಾ ಆಯೋಗ ನಡೆಸಿದ ಪರೀಕ್ಷೆಯಲ್ಲಿ ದುರ್ವರ್ತನೆ ನಡೆಸಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಸದರಿ ದುರ್ವರ್ತನೆಯು ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯದ್ದಾಗಿದ್ದು, ತೀವ್ರ ಸ್ವರೂಪದ ದುರ್ನಡತೆಯಾಗಿದ್ದು, ಆ ಆರೋಪದ ಮೇರೆಗೆ ಶ್ರೀ ಕೆ. ರಾಮೇಶ್ವರಪ್ಪ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರ ಭಾವಿಸಿರುವುದರಿಂದಲೂ,

ಶ್ರೀ ಕೆ. ರಾಮೇಶ್ವರಪ್ಪ ಅವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(1)(ಡಿ) ಹಾಗೂ (3)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಕೆ. ರಾಮೇಶ್ವರಪ್ಪ, ಉಪನಿರ್ದೇಶಕರು ಅವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಿದೆ.

ಶ್ರೀ ರಾಮೇಶ್ವರಪ್ಪ ಅವರು ಅಮಾನತ್ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಕೇಂದ್ರ ಸ್ಥಾನವನ್ನು ಬಿಡುವಂತಿಲ್ಲ.

ಅಮಾನತ್ ಅವಧಿಯಲ್ಲಿ ಶ್ರೀ ಕೆ. ರಾಮೇಶ್ವರಪ್ಪ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಇವರ ಸ್ಥಾನಕ್ಕೆ ತಾತ್ಕಾಲಿಕವಾಗಿ ಮೈಸೂರು ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಶ್ರೀ ಜಯರಾಂ, ಗ್ರೂಪ್ ಎ ಅಧಿಕಾರಿ, ಯೋಜನಾ ಸಮನ್ವಯಾಧಿಕಾರಿಗಳು, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ ಇವರನ್ನು ಪ್ರಭಾರದಲ್ಲಿ ಇರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ಬಲದೇವಕೃಷ್ಣ**

ಪಿ. ಆರ್. 1425 ಸರ್ಕಾರದ ಜಂಟಿ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆರ್‌ಡಿ 46 ಎಡಿಇ 2001 ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003**

**ವಿಷಯ :** ಶ್ರೀ ಬದರಿನಾಥ, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿರುವವರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಉಲ್ಲೇಖ :** ದಿನಾಂಕ: 29.9.2003ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 11 ಎಡಿಇ 2001.

ಮೇಲಿನ ವಿಷಯದ ಬಗ್ಗೆ ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ "ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 11 ಎಡಿಇ 2001" ಎಂಬುದಕ್ಕೆ ಬದಲಾಗಿ "ಆರ್‌ಡಿ 46 ಎಡಿಇ 2001" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ. ಆರ್. 1426

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3) .

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಪಸಂಮೀ 403 ಪಸಸೆ 2002 ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2003**

2002-2003ನೇ ಸಾಲಿನಲ್ಲಿ ಪ್ರಾಥಮಿಕ ಪಶು ಚಿಕಿತ್ಸ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿದ ಸರ್ಕಾರಿ ಆದೇಶ ಸಂಖ್ಯೆ: ಪಸಂಮಿ 403 ಪಸಸೆ 2002 ದಿನಾಂಕ: 25.3.2003 ರ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿನ ಸ್ಥಳವನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ಆದೇಶದ ಅನುಬಂಧದಲ್ಲಿ ನಮೂದಾಗಿರುವ ಸ್ಥಳ | ತಿದ್ದುಪಡಿ ಮಾಡಲಾದ ಸ್ಥಳ |
|---|---|---|
| 1. | ಕ್ರಮ ಸಂಖ್ಯೆ: 6 ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನ ಹುಲಿಕೆರೆ ಎಂಬುದನ್ನು | ಸುಗ್ಗನಹಳ್ಳಿ ಎಂದು ಓದಿಕೊಳ್ಳುವುದು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ. ಆರ್. 1427

ಪೀಠಾಧಿಕಾರಿ,

ಪಶುಸಂಗೋಪನೆ-ಎ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2003-2004ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಕೋರ್ಸಿಗೆ ನಿಯೋಜನೆ.

**ಓದಲಾಗಿದೆ :**
1. ದಿನಾಂಕ: 21.1.2003 ಸಂಖ್ಯೆ: ಆಕುಕ 111 ಎಂಪಿಎಸ್ 2002 ರ ಸರ್ಕಾರಿ ಆದೇಶ.
2. ದಿನಾಂಕ: 6.5.2003, 17.6.2003, 28.6.2003 ಮತ್ತು 1.8.2003 ಸಂಖ್ಯೆ: ಎಂಇಹೆಚ್ (3):7: 2003-2004ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ, ತಾರೀಖು: 25.10.2003 ಸಂಖ್ಯೆ: ಜೆಆರ್‌ಓ (ಎಂ): 16:2003-2004 ಹಾಗೂ ತಾ: 4.11.2003 ಸಂಖ್ಯೆ: ಜೆಆರ್‌ಓ (ಎಂ) 04: 2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ ಮತ್ತು ದಿನಾಂಕ: 25.10.2003 ಸಂಖ್ಯೆ: ಜೆಆರ್‌ಓ (ಎಂ):4: 2003-2004ರ ಮತ್ತು ದಿನಾಂಕ: 29.10.2003 ಸಂಖ್ಯೆ: ಪಿಜಿಎಸ್: 208:2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
3. ದಿನಾಂಕ: 17.10.2003 ಮತ್ತು 27.10.2003 ಸಂಖ್ಯೆ: ಆಕುಕ 111 ಎಂಪಿಎಸ್ 2003ರ ಸರ್ಕಾರಿ ಪತ್ರಗಳು.
4. ದಿನಾಂಕ: 28.7.2003 ಸಂಖ್ಯೆ: ಹೆಚ್‌ಎಫ್‌ಡಬ್ಲ್ಯು 10 ಎಂಪಿಎಸ್ 2003ರ ಅಧಿಸೂಚನೆ.

**ಪೀಠಿಕೆ:**

1. 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಮತ್ತು ಪದವಿ ಡಿಪ್ಲೊಮೋ ಕೋರ್ಸುಗಳ ಪ್ರವೇಶಕ್ಕೆ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 10ನೇ ನಿಯಮದೊಂದಿಗೆ ಓದಲಾದ 12ನೇ ನಿಯಮದಡಿ ಸರ್ಕಾರಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಸೇವಾ ನಿರತರಾದ ಸ್ನಾತಕೋತ್ತರ ಪದವಿ ಪಡೆಯದೆ ಇರುವ ಉಪನ್ಯಾಸಕರುಗಳನ್ನು ನಿಯೋಜಿಸಲು ಅವಕಾಶ ಕಲ್ಪಿಸಲಾಗಿದೆ. ದಿನಾಂಕ: 28.7.2003ರ ಅಧಿಸೂಚನೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಶೇಕಡ 20 ರಷ್ಟು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಲ್ಲಿ ಮತ್ತು ಶೇಕಡ 8 ರಷ್ಟು ಸ್ನಾತಕೋತ್ತರ ದಂತ ಕೋರ್ಸುಗಳಲ್ಲಿ ಸೀಟುಗಳನ್ನು ಕಾಯ್ದಿರಿಸಲಾಗಿದೆ.

2. ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡು ಮೇಲ್ಕಂಡ ವೈದ್ಯಕೀಯ ಕಾಲೇಜುಗಳಲ್ಲಿ ನೇರನೇಮಕಾತಿ ಮೂಲಕ ನೇಮಕಗೊಂಡ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ಕೋರ್ಸಿಗೆ ನಿಯೋಜಿಸಲು ಅನುವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್-II-A-I(1) ಮತ್ತು (4)ನೇ ನಿಯಮವನ್ನು ಸಡಿಲಿಸಿ ಒಟ್ಟಾರೆ 19 ಉಪನ್ಯಾಸಕರುಗಳನ್ನು ಅವರುಗಳು ಕನಿಷ್ಠ 10 ವರ್ಷಗಳ ಸೇವೆಯನ್ನು ಕರ್ನಾಟಕ ರಾಜ್ಯ ನಾಗರೀಕ ಸೇವೆಯ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಸಲ್ಲಿಸಬೇಕು ಎಂಬ ಷರತ್ತಿನೊಂದಿಗೆ ಹಾಗೂ ಇನ್ನಿತರ ಷರತ್ತುಗಳಿಗೆ ಬದ್ಧಗೊಳಿಸಿ ನಿಯೋಜಿಸಲು ಅನುವು ಮಾಡಿಕೊಡಲಾಗಿದೆ. ಅದಕ್ಕೆ ಪೂರಕವಾದ ಸೀಟ್ ಮ್ಯಾಟ್ರಿಕ್ಸ್‌ನ್ನು ದಿನಾಂಕ: 10.10.2003 ಸಂಖ್ಯೆ: ಆಕುಕ 10 ಎಂಪಿಎಸ್ 2003ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದೆ. ಅದರಂತೆ ಸೇವಾನಿರತ ಅರ್ಹ ಅಭ್ಯರ್ಥಿಗಳನ್ನು ಕೌನ್ಸಿಲಿಂಗ್ ಮೂಲಕ ದಿನಾಂಕ: 21.10.2003 ರಂದು ಆಯ್ಕೆ ಮಾಡಲಾಯಿತು. ಅವರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಿಗೆ ನಿಯೋಜಿಸಲು ಅಧಿಸೂಚನೆ ಹೊರಡಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

3. ದಿನಾಂಕ: 27.08.2003ರ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿಸೂಚನೆಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೋಮೋ ಕೋರ್ಸುಗಳಿಗೆ ಹಾಗೂ ಸ್ನಾತಕೋತ್ತರ ದಂತ ಪದವಿ ಕೋರ್ಸುಗಳಿಗೆ ಪ್ರವೇಶ ಪಡೆಯಲು ದಿನಾಂಕ: 31.10.2003ನ್ನು ಕಡೆ ದಿನಾಂಕ ಎಂದು ನಿಗದಿಗೊಳಿಸಲಾಗಿದೆ. ಆದ್ದರಿಂದ ತ್ವರಿತವಾಗಿ ಸರ್ಕಾರಿ ಆದೇಶ ಹೊರಡಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

4. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್-II-A-I ರ ನಿಯಮದ (1) ಮತ್ತು (4)ನೇ ಉಪ ನಿಯಮಗಳನ್ನು ಸಡಿಲಿಸಿ ಸೇವಾನಿರತ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳ ವ್ಯಾಸಂಗಕ್ಕೆ ನಿಯೋಜಿಸುವುದನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಅಪೆಂಡಿಕ್ಸ್-II-A-I ನೇ ನಿಯಮದ (1) ಮತ್ತು (4) ನೇ ಉಪ ನಿಯಮಗಳನ್ನು ಸಡಿಲಿಸಿ ಅದೇ ನಿಯಮದಡಿಯಲ್ಲಿರುವ ಉಳಿದೆಲ್ಲಾ ಷರತ್ತುಗಳನ್ನು ಪೂರೈಸುವ ಹಾಗೂ ಯಾವುದೇ ಗುತ್ತಿಗೆ ಆಧಾರದ ನೇಮಕಾತಿಗಳನ್ನು ಮಾಡಿಕೊಳ್ಳದೇ ಪರ್ಯಾಯ ವ್ಯವಸ್ಥೆ ಮಾಡಲು ಸಾಧ್ಯವಿರುವಷ್ಟು ಸಂಖ್ಯೆಯ ಅಭ್ಯರ್ಥಿಗಳನ್ನು ಮಾತ್ರ ನಿಯೋಜಿಸತಕ್ಕದ್ದು ಎಂಬ ಷರತ್ತಿಗೆ ಒಳಪಟ್ಟು ಪ್ರೊಬೇಷನ್, ಅವಧಿಯನ್ನು ಘೋಷಿಸಿರುವ ಅರ್ಹ ಅಭ್ಯರ್ಥಿಗಳನ್ನು ಮಾತ್ರ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆರ್ಥಿಕ ಇಲಾಖೆ ಸಹಮತಿಸಿದೆ. ಅದರಂತೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕೆಂದು ದಿನಾಂಕ: 17.10.2003ರ ಎರಡು ಸರ್ಕಾರಿ ಪತ್ರಗಳಲ್ಲಿ ನಿರ್ದಿಷ್ಟ ಸೂಚನೆಯನ್ನು ನೀಡಲಾಗಿದೆ. ಯಾವುದೇ ಕಾರಣಕ್ಕೂ ಮೈಸೂರು ವೈದ್ಯಕೀಯ ಕಾಲೇಜು, ಬೆಂಗಳೂರು ವೈದ್ಯಕೀಯ ಕಾಲೇಜು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕರನ್ನು 2003-2004ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆ ಮಾಡುವಾಗ ಅವರು ಸೇವಾನಿರತರಾದ ಕಾಲೇಜುಗಳಲ್ಲಿ ಸಂಬಂಧಪಟ್ಟ ವಿಷಯಗಳಲ್ಲಿ ಲಭ್ಯವಿರುವ ಸ್ನಾತಕೋತ್ತರ ಸೀಟುಗಳಿಗೆ ಆಯ್ಕೆ ಮಾಡಬೇಕೆಂದು ಮತ್ತು ಯಾವುದೇ ಕಾರಣಕ್ಕೂ ಸದರಿ ಕಾಲೇಜುಗಳಲ್ಲಿ ಸೇವಾ ನಿರತರಾದ ಬೋಧಕರುಗಳನ್ನು ಅವರು ಕಾರ್ಯನಿರ್ವಹಿಸುತ್ತಿರುವ ಕಾಲೇಜನ್ನು ಬಿಟ್ಟು ಬೇರೆ ಕಾಲೇಜುಗಳಲ್ಲಿರುವ ಸೀಟುಗಳಿಗೆ ಆಯ್ಕೆ ಮಾಡಬಾರದು ಎಂಬ ನಿರ್ದಿಷ್ಟ ಸೂಚನೆಯನ್ನು ನೀಡಲಾಗಿತ್ತು. ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆ ಮಾಡುವಾಗ ಭಾರತೀಯ ವೈದ್ಯಕೀಯ ಪರಿಷತ್ ನಿಗದಿಪಡಿಸಿರುವಂತೆ ಬೋಧಕ ವರ್ಗದ ಪ್ರಮಾಣ ಕಡಿಮೆಯಾಗದಂತೆ ಆಯಾ ಕಾಲೇಜುಗಳಲ್ಲಿಯೇ ನಿಯೋಜಿಸಲಾಗಿದೆ. ಆದಾಗ್ಯೂ ಎಂಡಿ (ಪಿ ಅಂಡ್ ಎಸ್‌ಎಂ) ಎಂಡಿ (ಟಿಬಿ ಅಂಡ್ ಸಿಡಿ), ಎಂಡಿ (ಪೆಥಾಲಜಿ), ಎಂಡಿ (ಸೈಕಿಯಾಟ್ರಿ), ಎಂಡಿ(ಆರ್‌ಡಿ), ಎಂಡಿ (ಅನಸ್ತೇಷಿಯಾ) ಕೋರ್ಸುಗಳು ಅದೇ ಕಾಲೇಜುಗಳಲ್ಲಿ ಲಭ್ಯವಿಲ್ಲದೆ ಇರುವ ಕಾರಣ ಇತರೆ ಕಾಲೇಜುಗಳಿಗೆ ನಿಯೋಜಿಸುವುದು ಅನಿವಾರ್ಯವಾಗಿದೆ. ವೃತ್ತಿ ಕೌಶಲ್ಯ ಅಭಿವೃದ್ಧಿಗಾಗಿ ನೇಮಕವಾಗಿರುವ ವೈದ್ಯರುಗಳನ್ನು ಹಾಗೂ ಗುತ್ತಿಗೆ ಆಧಾರದಲ್ಲಿ ನೇಮಕವಾಗಿರುವ ಉಪನ್ಯಾಸಕರುಗಳ ಸೇವೆಯನ್ನು ಬಳಸಿಕೊಳ್ಳುವುದರಿಂದ ಎಂಸಿಐ ನಿಗದಿಪಡಿಸಿರುವುದಕ್ಕಿಂತ ಬೋಧಕವರ್ಗ ಕಡಿಮೆಯಾಗುವುದಿಲ್ಲ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 111 ಎಂಪಿಎಸ್ 2003 ಬೆಂಗಳೂರು ದಿನಾಂಕ: 5ನೇ ನವೆಂಬರ್ 2003**

5. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 61ನೇ ನಿಯಮ ಹಾಗೂ ಅಪೆಂಡಿಕ್ಸ್-II-A-I ನೇ ನಿಯಮದೊಂದಿಗೆ ಓದಲಾದ 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೋಮೊ ಕೋರ್ಸುಗಳ ಪ್ರವೇಶಕ್ಕಾಗಿ, ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 10 ಮತ್ತು 12ನೇ ನಿಯಮದ ಪ್ರಕಾರ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಈ ಸರ್ಕಾರಿ ಆದೇಶದ ಅನುಬಂಧದಲ್ಲಿ ಸೂಚಿಸಿರುವ 19 ಉಪನ್ಯಾಸಕರುಗಳನ್ನು ಪ್ರತಿಯೊಬ್ಬರ ಹೆಸರಿನ ಮುಂದೆ ನಿರ್ದಿಷ್ಟಪಡಿಸಿರುವ ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸಿಗೆ ಮತ್ತು ಕಾಲೇಜಿಗೆ 2003-2004ನೇ ಶೈಕ್ಷಣಿಕ ವರ್ಷದಲ್ಲಿ ನಿಯೋಜಿಸಲಾಗಿದೆ. ಅವರುಗಳ ನಿಯೋಜನೆಯು ಮೇಲ್ಕಂಡ 61ನೇ ನಿಯಮದೊಂದಿಗೆ ಓದಲಾದ ಅಪೆಂಡಿಕ್ಸ್-II-A-I (9)ನೇ ನಿಯಮದೊಂದಿಗೆ ಓದಲಾದ 19ನೇ ನಮೂನೆಯಲ್ಲಿರುವ ಕರಾರು-ಪತ್ರದ ಬಾಂಡಿನಲ್ಲಿ ನಮೂದಿಸಿರುವ 3 ವರ್ಷಗಳ ಅವಧಿಯನ್ನು ಮಾರ್ಪಡಿಸಿ ಹತ್ತು ವರ್ಷಗಳು ಎಂದು ನಿರ್ದಿಷ್ಟಪಡಿಸಲಾಗಿದೆ.

6. ಮೇಲ್ಕಂಡ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಿಗೆ ನಿಯೋಜಿಸುವ ಪೂರ್ವದಲ್ಲಿ ಪ್ರತಿಯೊಬ್ಬ ಉಪನ್ಯಾಸಕರಿಂದಲೂ ಛಾಪಾ ಕಾಗದದ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 19ನೇ ನಮೂನೆಯಲ್ಲಿರುವ ಬಾಂಡನ್ನು ದ್ವಿಪ್ರತಿಗಳಲ್ಲಿ ಪಡೆಯತಕ್ಕದ್ದು. ಅದರಲ್ಲಿ ಕನಿಷ್ಠ 3 ವರ್ಷಗಳ ಸೇವೆಯ ಬದಲು "ಕನಿಷ್ಠ 10 ವರ್ಷಗಳ ಸೇವೆ" ಎಂದು ನಮೂದಿಸತಕ್ಕದ್ದು. ಬಾಂಡಿನ ಒಂದು ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಬೇಕು ಮತ್ತು ಇನ್ನೊಂದು ಪ್ರತಿಯನ್ನು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದಲ್ಲಿ ಶಾಶ್ವತವಾಗಿರುವಂತೆ ಸಂರಕ್ಷಿಸಬೇಕು. ಅವರನ್ನು ಕರ್ತವ್ಯದಿಂದ ವಿಮುಕ್ತಗೊಳಿಸುವ ಪೂರ್ವದಲ್ಲಿ ಅದನ್ನು ಪಡೆಯುತಕ್ಕದ್ದು. ಅವರು ಈ ಹಿಂದೆ ನಿಯೋಜನೆ ಸೌಲಭ್ಯವನ್ನು ಪಡೆದಿರುವುದಿಲ್ಲ ಎಂಬುದನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಖಚಿತಪಡಿಸಿಕೊಳ್ಳಬೇಕು.

7. ನಿಯೋಜಿಸಲ್ಪಟ್ಟ ಉಪನ್ಯಾಸಕರುಗಳು ಮೇಲ್ಕಂಡ KCSRs ನ ಉಪಬಂಧಗಳ ಅನುಸಾರ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ವೇತನ ಭತ್ಯೆ, ಮನೆಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಮಾತ್ರ ಪಡೆಯತಕ್ಕದ್ದು, ಆರ್ಥಿಕ ಇಲಾಖೆಯ ಸಹಮತಿಯನ್ನು ದಿನಾಂಕ: 10.7.1996 ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರ ಸರ್ಕಾರಿ ಆದೇಶದ ಅನುಸೂಚಿಯ 10ನೇ ಐಟಂ ಪ್ರಕಾರ ಹಾಗೂ ತಾರೀಖು: 29.08.2003 ಸಂಖ್ಯೆ: ಆಇ 1514 ವೆಚ್ಚ (5): 2003ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ).

**ದಿನಾಂಕ: 5.11.2003 ಸಂಖ್ಯೆ: ಆಕುಕ 111 ಎಂಪಿಎಸ್ 2003ರ ಸರ್ಕಾರಿ ಆದೇಶದ ಅನುಬಂಧ**

2003-2004ನೇ ವರ್ಷದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಬೆಂಗಳೂರು ವೈದ್ಯಕೀಯ ಕಾಲೇಜಿನ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಿಗೆ ನಿಯೋಜಿಸಲ್ಪಟ್ಟ ವಿವರಗಳು.

| ಕ್ರಮ ಸಂಖ್ಯೆ | ಆಯ್ಕೆ ಜೇಷ್ಠತಾ ಸಂಖ್ಯೆ | ಉಪನ್ಯಾಸಕರ ಹೆಸರು ಹುದ್ದೆಯ ಪದನಾಮ ಮತ್ತು ಕಾಲೇಜು | ನಿಯೋಜಿಸಲ್ಪಟ್ಟ ಸ್ನಾತಕೋತ್ತರ ವೈದ್ಯಕೀಯ ಕೋರ್ಸು ಮತ್ತು ಕಾಲೇಜು | ಪ್ರವರ್ಗ |
|---|---|---|---|---|
| 1 | 2 | 3 | 4 | 5 |
| 1 | 1 | ಡಾ: ರೇಖಾ ಬಿ. ಎಸ್. ಅಂಗರಚನಾಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಎಸ್. (ಅಂಗರಚನಾಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಸಾಮಾನ್ಯವರ್ಗ |
| 2 | 2 | ಡಾ: ಕಲಾ ಯಾದವ್ ಎಂ. ಎಲ್. ಅಣುಜೀವಿಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ಅಣುಜೀವಿಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಸಾಮಾನ್ಯವರ್ಗ |
| 3 | 5 | ಡಾ: ಮಂಜುನಾಥ್ ಎಸ್. ಎನ್. ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು. | ಪರಿಶಿಷ್ಟ ಪಂಗಡ |
| 4 | 4 | ಡಾ: ದಾಕ್ಷಾಯಿಣಿ ಆರ್. ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ) ಕೆಂಪೇಗೌಡ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬೆಂಗಳೂರು | ಸಾಮಾನ್ಯವರ್ಗ |
| 5 | 6 | ಡಾ: ಅಜಿತ ಎಂ. ಬಿ. ಶಸ್ತ್ರಚಿಕಿತ್ಸಾಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಎಸ್. (ಶಸ್ತ್ರಚಿಕಿತ್ಸಾಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು. | ಸಾಮಾನ್ಯವರ್ಗ |
| 6 | 7 | ಡಾ: ನಿರ್ಮಲ ಎ. ಸಿ. ವೈದ್ಯಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ವೈದ್ಯಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಸಾಮಾನ್ಯವರ್ಗ |
| 7 | 8 | ಡಾ: ಬಿ. ದಿನೇಶ್, ವೈದ್ಯಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ವೈದ್ಯಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು | ಸಾಮಾನ್ಯವರ್ಗ |
| 8 | 9 | ಡಾ: ಎ. ಮಂಜುಳ, ವೈದ್ಯಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ವೈದ್ಯಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು | ಪರಿಶಿಷ್ಟ ಜಾತಿ |

| 1 | 2 | 3 | 4 | 5 |
|---|---|---|---|---|
| 9 | 10 | ಡಾ: ಕುರುಬ ಶ್ರೀಲಕ್ಷ್ಮಿ ರೋಗ ಲಕ್ಷಣಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ರೋಗಲಕ್ಷಣಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ಸಾಮಾನ್ಯವರ್ಗ |
| 10 | 11 | ಡಾ: ಆಶಾಲತ ಎನ್. (ರೋಗಲಕ್ಷಣಶಾಸ್ತ್ರ) ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ರೋಗಲಕ್ಷಣಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಸಾಮಾನ್ಯವರ್ಗ |
| 11 | 13 | ಡಾ: ವಾಣಿ ಡಿ. ರೋಗಲಕ್ಷಣಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ರೋಗಲಕ್ಷಣಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು | ಸಾಮಾನ್ಯವರ್ಗ |
| 12 | 14 | ಡಾ: ಲಕ್ಷ್ಮೀ ಎಂ. ಶಿಶುವೈದ್ಯಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ.ಡಿ. (ಶಿಶುವೈದ್ಯಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಸಾಮಾನ್ಯವರ್ಗ |
| 13 | 15 | ಡಾ: ಸಹನ ದೇವದಾಸ್, ಶಿಶುವೈದ್ಯಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ಶಿಶುವೈದ್ಯಶಾಸ್ತ್ರ) ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಸಾಮಾನ್ಯವರ್ಗ |
| 14 | 16 | ಡಾ: ಹೆಚ್. ಪಿ. ಶೋಭಾ, ಅಸ್ಥಿ ಚಿಕಿತ್ಸಾಶಾಸ್ತ್ರ ಉಪನ್ಯಾಸಕರು ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಎಸ್. (ಅಸ್ಥಿಚಿಕಿತ್ಸಾಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಸಾಮಾನ್ಯವರ್ಗ |
| 15 | 17 | ಡಾ: ಶಾಂತಕುಮಾರ್ ಪಿ.ವಿ. ಅಸ್ಥಿಚಿಕಿತ್ಸಾಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಎಸ್. (ಅಸ್ಥಿಚಿಕಿತ್ಸಾಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಸಾಮಾನ್ಯವರ್ಗ |
| 16 | 18 | ಡಾ: ಹೆಚ್. ಜಿ. ಮಂಜುನಾಥ್, ಅರವಳಿಕೆಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ಅರವಳಿಕೆಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು | ಪರಿಶಿಷ್ಟಜಾತಿ |
| 17 | 19 | ಡಾ: ಶಶಿಕಲಾ ಟಿ. ಕೆ. ಅರವಳಿಕೆಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂ. ಡಿ. (ಅರವಳಿಕೆಶಾಸ್ತ್ರ) ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಸಾಮಾನ್ಯವರ್ಗ |
| 18 | 20 | ಡಾ: ಬಿ.ಎಲ್. ಶಶಿಭೂಷಣ್ ಕ್ಷಯ ಮತ್ತು ಎದೆರೋಗಗಳಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ಕ್ಷಯ ಮತ್ತು ಎದೆರೋಗಗಳಶಾಸ್ತ್ರ) ಜೆ.ಎನ್. ವೈದ್ಯಕೀಯ ಕಾಲೇಜು, ಬೆಳಗಾವಿ. | ಸಾಮಾನ್ಯವರ್ಗ |
| 19 | 29 | ಡಾ: ಜ್ಯೋತಿಜಾಧವ್, ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂ. ಡಿ. (ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ) ಎಂ. ಎಸ್. ರಾಮಯ್ಯ ವೈದ್ಯಕೀಯ ಕಾಲೇಜು, ಬೆಂಗಳೂರು | ಸಾಮಾನ್ಯವರ್ಗ |

**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ವೈದ್ಯಕೀಯ ಶಿಕ್ಷಣ).

ಪಿ. ಆರ್. 1428

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಜಂಟಿ ನಿರ್ದೇಶಕರು (ವೈದ್ಯಕೀಯ) ಹುದ್ದೆಯನ್ನು ಜಂಟಿ ನಿರ್ದೇಶಕರು (ವೈದ್ಯಕೀಯ ಮತ್ತು ಮಾನಸಿಕ ಆರೋಗ್ಯ) ಎಂದು ಪುನರ್ ಪದನಾಮೀಕರಣ ಕುರಿತು ಆದೇಶ.

**ಪ್ರಸ್ತಾವನೆ:**

ಪ್ರಸ್ತುತ ಜಾರಿಯಲ್ಲಿರುವ ಮಾನಸಿಕ ಆರೋಗ್ಯ ಕಾಯ್ದೆ 1987 (ಮೆಂಟಲ್ ಹೆಲ್ತ್ ಆಕ್ಟ್ 1987) ಮತ್ತು ರಾಜ್ಯದ ಮಾನಸಿಕ ಆರೋಗ್ಯ ನಿಯಮಾವಳಿಗಳು 1990 (ರಾಜ್ಯ ಮೆಂಟಲ್ ಹೆಲ್ತ್ ರೂಲ್ಸ್ 1990) ರನ್ವಯ ರಾಜ್ಯದಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿರುವ ಜಂಟೀ ನಿರ್ದೇಶಕರು (ವೈದ್ಯಕೀಯ) ಈ ಹುದ್ದೆಯನ್ನು "ಜಂಟಿ ನಿರ್ದೇಶಕರು, (ವೈದ್ಯಕೀಯ ಮತ್ತು ಮಾನಸಿಕ ಆರೋಗ್ಯ)" " Joint director (Medical and Mental Health)" ಎಂದು ಪುನರ್ ಪದನಾಮೀಕರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 751 ಎಂಎಸ್‌ಎಸ್ 2003 ಬೆಂಗಳೂರು, ದಿನಾಂಕ: 4ನೇ ನವೆಂಬರ್ 2003**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಜಂಟಿ ನಿರ್ದೇಶಕರು, (ವೈದ್ಯಕೀಯ), ಈ ಹುದ್ದೆಯನ್ನು "ಜಂಟಿ ನಿರ್ದೇಶಕರು (ವೈದ್ಯಕೀಯ ಮತ್ತು ಮಾನಸಿಕ ಆರೋಗ್ಯ)" ಎಂದು ಪುನರ್ ಪದನಾಮೀಕರಣ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಪಿ. ಆರ್. 1429

ಸರ್ಕಾರದ ಉಪ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**DEPARTMENT OF PERSONNEL AND ADMINISTRATIVE REFORMS SECRETARIAT**

**Sub :** Suspension of Sri. A. K. Monnappa, IAS (KN 92).

**Order No. DPAR 667 SAS 2002, Bangalore, dated: 6th November 2003**

Whereas a Sub-committee was constituted by the Karnataka Public Service Commission on 14.3.2002 to inquire into valuation of answer scripts of 3 candidates who had appeared for the final examination conducted by the Karnataka Public Service Commission in the year 1999 for direct recruitment for selection to Group A & Group B posts in the State Civil Services of Karnataka, and also to inquire into any irregularities/ lapses disclosed during the inquiry.

Whereas, the Sub-committee in its report has recommended to initiate appropriate disciplinary action and criminal action against Sri. A. K. Monnappa and others who have committed offences of criminal conspiracy, breach of trust, manipulation of records, etc.

Whereas, the Chairman, Karnataka Public Service Commission, in his letter dated: 12.11.2002 has requested the Govt. to initiate disciplinary action against Sri. A.K. Monnappa, IAS, former Secretary, Karnataka Public Service Commission and others.

Whereas, by his acts of omissions & commissions as noted by the Sub-committee in its report, Sri A. K. Monnappa, IAS, has violated the provisions of Rule 3 of all India Services (Conduct) Rules, 1968 and committed misconduct under the said Rules.

Whereas, Government entrusted the matter to Shri K. K. Misra, IAS, to conduct an enquiry into the whole episode.

Whereas, Government have examined the report submitted by the officer.

Whereas, Government is satisfied that it is necessary to place Sri. A. K. Monnappa, IAS, under suspension pending institution of disciplinary proceedings against him under the All India Services (Discipline & Appeal) Rules, 1969.

Now, therefore, in exercise of the powers conferred under Rule 3(1)(a) of the All India Services (Discipline & Appeal) Rules, 1969, Sri. A. K. Monnappa IAS (KN 91), former Secretary, Karnataka Public Service Commission, Bangalore and presently working as Director (SEP) & E/o Joint Secretary, Rural Development and Panchayat Raj Department, Bangalore is placed under suspension with immediate effect and until further orders pending institution of disciplinary proceedings

During the period of suspension, the officer shall be paid subsistence allowance in accordance with Rule 4 of All India Services (Discipline & Appeal) Rules, 1969.

During the period of suspension, the officer shall not leave the Headquarters under any circumstances without the written permission of the Govt.

By Order and in the Name of the Governor of Karnataka,

**S. SELVAKUMAR**

PR-1430

Deputy Secretary to Government,
DPAR (Services).

**LABOUR SECRETARIAT**

**Subject :** Constitution of a Study Group to ascertain the problem of Contract Labour and the Industry in Karnataka-Reg.

**Read :** D. O. letters, No. CLA/CR-4/2003-04, dated: 9.5.2003 and 8.8.2003, of the Labour Commissioner, Government of Karnataka, Bangalore.

**Preamble:**

With the emergence of industrial growth the necessity to employ more workers during certain exigencies has payed the way for employment of Contract Labour. of late, managements of industry and commerce are resorting to engagement of workers through contractors for all non-core activity. In order to safeguard the interests of the Contract workers, the Contract Labour (Regulation and Abolition) Act, 1970 was enacted and brought into force. The Act aims at abolition of Contract Labour in core areas and, alternatively, at regulating the service conditions of Contract workers where abolition is not feasible. The Act and the Rules made thereunder provide for provision and maintenance of certain basic welfare amenities for contract workers by the registered principal employers and the licensed contractors.

In the administration of the Act, the State Government has abolished Contract Labour in some Industries (Certain processes and systems) where the nature of job has been found perennial in character; however, this has been challenged in the Courts.

On account of globalisation and liberlisation, the trends of employment of workers and their status have been fast changing. Ancilliarisation and outsourcing of production activities are becoming order of the day. Competition in the global market has become acute and flexibility to the management to facilitate more production and greater productivity has gained importance. Employment in the organised sector has been losing its permanency character and becoming more and more unorganized. The management and the trade unions have been discussing these Issues at various fora advocating their own priorities.

With a view therefore to striking a balance between the management and the labour, undertaking a detailed study to ascertain the extent of the problem of Contract Labour and also the extent to which the employer should be enabled to have the flexibility to employ Contract Labour, has become inevitable.

The Minister of Labour, Government of Karnataka, has, considering the present day industrial scenario, announced during the May Day 2003 celebrations that a detailed study of the problem of Contract Labour will be instituted so as to obtain information to formulate a Policy to protect and safeguard the interests of Contract Labour and the Industry too, to augment the industrial growth in the State.

Further, a preliminary meeting involving representatives of the management and trade unions as also academicians, held on 7.5.2003 under the Chairmanship of the Labour Commissioner, Government of Karnataka at Bangalore, arrived at a consensus that such a study should be entrusted to an Academic Institution of repute and competence.

The Labour Commissioner has consulted Prof. Babu Mathew, Professor of Law & Co-ordinator, Law & Society Cluster, National Law School of India University (NLSIU), Bangalore, who has offered a detailed proposal to take up such a study and complete the same within six months, at a cost of Rs. 7.00 (Rupees Seven lakhs) The Labour Commissioner has recommended that the study in question could be entrusted to Prof Babu Mathew of NLSIU at a cost of Rs. 7.00 lakhs, with Terms of Reference and time stipulation of six months.

**G.O. No. LD 16 LWA 2003, Bangalore, dated: 7th November, 2003**

Government, on a careful consideration of the proposals as in the Preamble, is pleased to entrust Prof. Babu Mathew, Professor of Law & Co-ordinator, Law & Society Cluster, National Law School of India University, Bangalore, with the work of undertaking a comprehensive study of the problem of Contract Labour and the Industry in Karnataka, at a cost of Rs.7.00 lakhs (Rupees Seven lakhs only).

2. The Terms of Reference of this study shall be as given in the Annexure hereto.

3. Prof. Babu Mathew of NLSIU shall complete this study within a period of Six months and submit a report, highlighting issues and containing recommendations of pragmatic value, to the Government.

4. Ther Labour Commissioner shall provide the necessary logistical support.

5. The expenditure hereof shall be debited to the Head of Account, "2230-01-101-0-01-059(Plan)"

6. Terms of Payment: 50% of the cost payable as Ist Instalment for commencing the project; 25% thereof as IInd Instalment on submission of draft report; the remainder as IIIrd and final Instalment on submission and acceptance of final report.

7. This Order is issued with the concurrence of the Finance Department, vide its Ref. No. FD/377/Exp.-9/03, dated: 29.10.2003.

By Order and in the name of the Governor of Karnataka,

**M. B. GOKHALE**
Desk Officer-II,
Labour, Department.

**ANNEXURE**

**TERMS OF REFERENCE**

**FOR THE PROPOSED STUDY OF THE PROBLEM OF CONTRACT LABOUR AND THE INDUSTRY IN KARNATAKA**

1. To study the impact of globalisation and liberalisation on the Industry and Employment, with special reference to those Establishments in which the system of Contract Labour is widely prevalent;

2. To study the reasons as to why the Establishments concerned are compelled to opt for the system of Contract Labour;

3. To study the impact of Contract Labour system on workers, with particular reference to their conditions of employement, social security and social welfare.

4. To study the operation of the Contract Labour (Regulation and Abolition) Act, 1970, together with the Karnataka Rules, 1974 (made under the Act) and the various decisions of the Courts and thereby to evaluate the extent to which the said law has achieved its objectives;

5. To examine the problems of implementation of the said law and suggest innovative ways and means to ensure the fullest possible implementation of the legal regime;

6. To examine matters incidental to and connected with any of the specific Terms of Reference identified above in order to arrive at a comprehensive analysis of the Contract Labour System and to make relevant recommendations;

7. To give appropriate suggestions to harmonise the need of the Industry as well as the workers vis-a-vis the Contract Labour System.

**M. B. GOKHALE**
Desk Officer-II,
Labour, Department.

PR-1431

**ಕಾನೂನು ಸಚಿವಾಲಯ**

**ವಿಷಯ :** ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುದ್ದೆಗಳ ನೇಮಕಾತಿಯನ್ನು ಪೂರ್ಣಗೊಳಿಸಲು ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ಉಚ್ಛ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಹೆಚ್‌ಸಿಬಿ 208: ಬಿಯುಡಿ:ಸಬ್-ಕೋರ್ಟ್ಸ್: 2002, ದಿನಾಂಕ: 5.8.2003.

**ಪ್ರಸ್ತಾವನೆ:**

ಕರ್ನಾಟಕ ಉಚ್ಛ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಮೇಲೆ ಓದಲಾದ ದಿನಾಂಕ: 5.8.2003ರ ಪತ್ರದಲ್ಲಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುದ್ದೆಗಳನ್ನು ತುಂಬುವ ಪ್ರಕ್ರಿಯೆಗಾಗಿ ಪ್ರಸಕ್ತ ಸಾಲಿಗೆ ಒದಗಿಸಲಾದ ರೂ. 1,50,000 ಗಳು ಪೂರ್ಣವಾಗಿ ಬಳಕೆಯಾಗಿರುವುದಾಗಿ ಮತ್ತು ಈ ಪ್ರಕ್ರಿಯೆಯನ್ನು ನಡೆಸುವಲ್ಲಿ ಪಾವತಿಯಾಗದೆ ಉಳಿದಿರುವ ಬಿಲ್ಲುಗಳ ಮೊತ್ತ ರೂ.1,12,000ಗಳನ್ನು ಪಾವತಿ ಮಾಡಲು ಮತ್ತು ಈ ವರ್ಷದ ತದನಂತರ ನೇಮಕಾತಿ ಪ್ರಕ್ರಿಯೆಗಾಗಿ ರೂ. 5,00,000ಗಳನ್ನು ಪ್ರಾರಂಭಿಕ ಮೊತ್ತವಾಗಿ ಹೆಚ್ಚುವರಿ ಅನುದಾನದ ರೂಪದಲ್ಲಿ ಒದಗಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 111 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003**

ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುದ್ದೆಗಳನ್ನು ತುಂಬುವ ಪ್ರಕ್ರಿಯೆಯಲ್ಲಿ ಉಳಿದಿರುವ ಬಿಲ್ಲುಗಳನ್ನು ಪಾವತಿಸುವ ಸಲುವಾಗಿ ರೂ.1,12,000 (ರೂಪಾಯಿಗಳು ಒಂದು ಲಕ್ಷದ ಹನ್ನೆರಡು ಸಾವಿರ ಮಾತ್ರ)ಗಳನ್ನು ಲೆಕ್ಕ ಶೀರ್ಷಿಕೆ "2014-00-800-6-00 ಮುನ್ಸೀಫ್ ನೇಮಕಾತಿಗಾಗಿ ಪರೀಕ್ಷೆ ವೆಚ್ಚಗಳು-ಇತರೆ ವೆಚ್ಚಗಳು" ಅಡಿಯಲ್ಲಿ ಹೆಚ್ಚುವರಿಯಾಗಿ ನೀಡಲು ಮಂಜೂರಾತಿ ನೀಡಿದೆ.

ಈ ಹೆಚ್ಚುವರಿ ಅನುದಾನವನ್ನು ಎರಡನೆಯ ಪೂರಕ ಅಂದಾಜಿನಲ್ಲಿ ಸಕ್ರಮಗೊಳಿಸಬೇಕಾಗಿದ್ದು, ಈ ಕುರಿತು ಸೂಕ್ತ ಸಮಯದಲ್ಲಿ ನೇರವಾಗಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1167 ವೆಚ್ಚ-7:03, ದಿನಾಂಕ: 18.10.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1).

ಪಿಆರ್.1432

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಗುಲ್ಬರ್ಗ ಇದರ ನಿರ್ದೇಶಕರ ಮಂಡಳಿಗೆ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** 1. ಆದೇಶ ಸಂ: ಕೃತೋಇ: 275. ಕೃಉಇ. 2002, ದಿನಾಂಕ: 25.6.2002.

2. ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಗುಲ್ಬರ್ಗಾದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂ: ಕತೊಅಮಂನಿಗು: ತಾ: ಅಧಿಕಾರಿ ನಿ: 2003-04: 338: ದಿನಾಂಕ: 15.10.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ಆರ್ಟಿಕಲ್ ಆಫ್ ಅಸೋಸಿಯೇಷನ್ ಪ್ರಕರಣ 13 ಮತ್ತು 14 2ಎ(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯ ಸರ್ಕಾರವು 9 ಜನ ಅಧಿಕಾರಿ ನಿರ್ದೇಶಕರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿ ಆದೇಶವನ್ನು ಹೊರಡಿಸಿತ್ತು.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಶ್ರೀ ಎಸ್. ಎಂ. ಮೇತಾ, ಜೀವ ಜನರಲ್ ಮ್ಯಾನೇಜರ್, ಬೆಂಗಳೂರು ರವರು ವರ್ಗಾವಣೆಗೊಂಡಿದ್ದು ಅದರ ಸ್ಥಾನಕ್ಕೆ ಶ್ರೀ ಬಿ. ಐ. ಮೋಹಂತಿ, ಜೀವ ಜನರಲ್ ಮ್ಯಾನೇಜರ್, ನಬಾರ್ಡ್, ಬೆಂಗಳೂರು ರವರು ಅಧಿಕಾರಿ ವಹಿಸಿಕೊಂಡಿದ್ದು, ಸದರಿಯವರನ್ನು ಅಧಿಕಾರಿ ನಿರ್ದೇಶಕರನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಗುಲ್ಬರ್ಗಾರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ:

**ಸರ್ಕಾರಿ ಆದೇಶ ಸಂ: ಕೃತೋಇ: 605. ಕೃಉಇ. 2003, ಬೆಂಗಳೂರು ದಿನಾಂಕ: 5ನೇ ನವೆಂಬರ್ 2003**

ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ಆರ್ಟಿಕಲ್ ಆಫ್ ಅಸೋಸಿಯೇಷನ್ ಪ್ರಕರಣ 13 ಮತ್ತು 14 2ಎ(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯ ಸರ್ಕಾರವು ಶ್ರೀ ಬಿ. ಬಿ. ಮೋಹಂತಿ, ಜೀವ್ ಜನರಲ್ ಮ್ಯಾನೇಜರ್, ನಬಾರ್ಡ್, ಬೆಂಗಳೂರು ರವರನ್ನು ಶ್ರೀ ಎಸ್. ಎಂ. ಮೆಹ್ತಾರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿಆರ್.1433

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 410 ಪಿಐಎಂ 2003, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 536 ಪಿಐಎಂ 95, ದಿನಾಂಕ: 18.6.97 ರನ್ವಯ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಮಂಟೂರು, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಇಲ್ಲಿ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿರುವ ಡಾ: ಆರ್.ಎನ್.ಜೀರೆ ರವರು ದಿನಾಂಕ: 10.4.2002 ರಿಂದ ದೀರ್ಘಕಾಲ ಅನಧಿಕೃತ ಗೈರು ಹಾಜರಾಗಿದ್ದು, ಇವರ ಸೇವೆಯನ್ನು ಗೈರು ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1435

**ಚೋಮಾನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## LABOUR SECRETARIAT

### CORRIGENDUM

**No. LD 121 LMW 2003 Bangalore, dated: 28th October, 2003**

In the G. O. No. LD 121 LMW 2003, dated: 8th October, 2003, the Head of Account, at para (4) of the operative portion, may be read as, "2230-01-101-0-01-059(Plan)".

By Order and in the name of the Governor of Karnataka,

**M. B. GOKHALE**

PR-1436

Desk Officer-II,

Labour Department.

## ಕಾನೂನು ಸಚಿವಾಲಯ

**ವಿಷಯ :** ಶ್ರೀ ಬಿ. ಡಿ. ಹರುಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು ಇಂಡಿ (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು ಮುಳಬಾಗಿಲು) ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದಿಂದ ಇವರನ್ನು ಮುಕ್ತಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಬೆಂಗಳೂರುರವರ ಸಮೀಕ್ಷಾ ಟಿಪ್ಪಣಿ ಸಂ: ಕಂಪ್ಲೆಂಟ್:ಉಪ ಲೋಕಾಯುಕ್ತ: ಬಿಡಿ-2: 95-96: ಲೋಕ್: ಇನ್ವೆ (ಬಿ) ಬಿಡಿ-8:ಸಿಆರ್-1:93, ದಿನಾಂಕ: 19.8.1998.
2. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಅ.ಸ.ಪತ್ರ ಸಂ. ಕಂಪ್ಲೆಂಟ್: ಉಪ ಲೋಕಾಯುಕ್ತ: ಬಿಡಿ-2: 95-96: ಪಿಸಿ ನಂ: ಲೋಕ್: ಇನ್ವೆ (ಬಿ) ಬಿಡಿ-8: ಸಿಆರ್-1: 93 ಕೆಎಲ್ಆರ್ ದಿನಾಂಕ: 2.2.99.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು ರವರ ಪತ್ರ ಸಂ. ಡಿಪಿಎನ್: ಸಿಶಾ-1: 309: 98-99, ದಿನಾಂಕ: 12.3.99
4. ಸರ್ಕಾರಿ ಆದೇಶ ಸಂ. ಲಾ 23 ಪಿಪಿಇ 99, ದಿನಾಂಕ: 5.7.1999.
5. ಇಲಾಖಾ ವಿಚಾರಣಾ ವರದಿ ಸಂ. ಲೋಕ್: ಎಆರ್ಇ-3: ಇಎನ್‌ಕ್ಯೂ-20:01-02 01-02, ದಿನಾಂಕ: 30.6.03.
6. ಲೋಕಾಯುಕ್ತ, ಕರ್ನಾಟಕ, ಬೆಂಗಳೂರು, ಇವರ ಪತ್ರ ಸಂ. ಲೋಕ್: ಎಆರ್ಇ-3: ಇಎನ್‌ಕ್ಯೂ-20:01-02, ದಿನಾಂಕ: 29.9.03.

**ಪ್ರಸ್ತಾವನೆ:**

ಶ್ರೀ ಬಿ. ಡಿ. ಹರುಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಇಂಡಿ ಇವರು ಹಿಂದೆ ಮುಳಬಾಗಿಲಿನಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿದ್ದು ಶ್ರೀನಿವಾಸಪುರದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಪ್ರಭಾರ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಎಸ್. ನಾರಾಯಣಸ್ವಾಮಿ ಬಿನ್ ಶ್ರೀರಾಮಯ್ಯ ಶ್ರೀನಿವಾಸಪುರ ಇವರಿಂದ ಶ್ರೀನಿವಾಸಪುರದ ನ್ಯಾಯಾಲಯದಲ್ಲಿನ ಸಿ. ಸಿ. ನಂ. 242: 91 ರಲ್ಲಿ ಆಪಾದಿತರಿಗೆ ಸಹಾಯಮಾಡಲು ರೂ. 200-00 ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ ಇವರ ವಿರುದ್ಧ 1988 ರ ಲಂಚ ನಿರೋಧ ಕಾಯ್ದೆ ಕಲಂ 13(2)ರ ಜೊತೆ ಓದಲಾಗಿರುವ ಕಲಂ 7.13(1) (ಡಿ) ರನ್ವಯ ಕರ್ನಾಟಕ ಲೋಕಾಯುಕ್ತ ಕಛೇರಿ ಕೋಲಾರದಲ್ಲಿ ಕ್ರಿಮಿನಲ್ ನಂ.1:93 ದಾಖಲಾಗಿರುವುದರಿಂದ ಇವರ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಪತ್ರದಲ್ಲಿ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳ ತಪಾಸಣೆಯಿಂದ ಶ್ರೀ ಹರುಗೇರಿ ಸಹಾಯಕ ಸರ್ಕಾರಿ ಅಭಿಯೋಜಕರು ಇಂಡಿ ಇವರು ಲಂಚ ಪಡೆದುಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಕರ್ನಾಟಕ ಲೋಕಾಯುಕ್ತ ಕಾಯ್ದೆ 12(3) ರಡಿಯಲ್ಲಿ ಶಿಸ್ತು ಕ್ರಮ ತೆಗೆದುಕೊಳ್ಳುವಂತೆ ಮೇಲೆ ಓದಲಾದ (2) ರಲ್ಲಿ ಪತ್ರದಲ್ಲಿ ಲೋಕಾಯುಕ್ತ ರಿಜಿಸ್ಟ್ರಾರ್‌ರವರು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಿಸಿದ ತನಿಖಾ ಕಾಗದ ಪತ್ರಗಳು ಕರ್ನಾಟಕ ಲೋಕಾಯುಕ್ತ ವಶದಲ್ಲಿರುವುದರಿಂದ ಕೆ.ಸಿ.ಎಸ್. (ವ.ನಿ. ಮತ್ತು ಮೇ) ನಿಯಮಾವಳಿ 1957 ರ ನಿಯಮ 14 ರನ್ವಯ ಪ್ರಸ್ತುತ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸುವುದು ಸಮಂಜಸವೆಂದು ಮೇಲೆ ಓದಲಾದ (3) ರಲ್ಲಿ ಅಭಿಯೋಗ ನಿರ್ದೇಶಕರು ಅಭಿಪ್ರಾಯಪಟ್ಟಿದ್ದರ ಹಿನ್ನೆಲೆಯಲ್ಲಿ ಪ್ರಕರಣದ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಕ್ರಮಾಂಕ (4) ರ ಸರ್ಕಾರದ ಆದೇಶದನ್ವಯ ಕರ್ನಾಟಕ ಉಪ ಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತರ ಕಛೇರಿ, ಬೆಂಗಳೂರು ಇವರಿಗೆ ವಹಿಸಲಾಗಿತ್ತು. ಸದರಿ ಆದೇಶದ ಪ್ರಕರಣದ ವಿಚಾರಣೆ ನಡೆಸಿ ಶ್ರೀ ಬಿ. ಡಿ. ಹರುಗೇರಿ ಅಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಮುಳಬಾಗಿಲುರವರ ಮೇಲಿನ ಆರೋಪ ಸಾಬೀತಾಗಿಲ್ಲವೆಂಬ ಅಭಿಪ್ರಾಯದೊಂದಿಗೆ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಲೋಕಾಯುಕ್ತರಿಗೆ, ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರಮಾಂಕ (6) ರ ತಮ್ಮ ಪತ್ರದೊಂದಿಗೆ ಲಗತ್ತಿಸಿ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು ರವರು ಸರ್ಕಾರಕ್ಕೆ ವರದಿ ಸಲ್ಲಿಸುತ್ತಾ, ಆಪಾದಿತರ ಮೇಲಿನ ಆರೋಪ ಸಾಬೀತಾಗದೇ ಇರುವುದರಿಂದ ಆಪಾದಿತರನ್ನು ಆರೋಪದಿಂದ ಮುಕ್ತಿಗೊಳಿಸಿದ ಬಗ್ಗೆ ಕ್ರಮ ಜರುಗಿಸಿ ಮಾಹಿತಿ ನೀಡಬೇಕೆಂದು ತಿಳಿಸಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 23: ಪಿಪಿಇ 99, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003**

ಶ್ರೀ ಬಿ. ಡಿ. ಹರುಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಇಂಡಿ (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು ಮುಳಬಾಗಿಲು) ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದ ಆರೋಪ ಸಾಬೀತಾಗಿಲ್ಲದೇ ಇರುವುದರಿಂದ ಸದರಿ ಅಧಿಕಾರಿಯವರನ್ನು ಸರ್ಕಾರವು ಆರೋಪದಿಂದ ಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಹೆಚ್. ನಾಗೇಂದ್ರಪ್ಪ**

ಪಿಆರ್.1437 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, (ಆಡಳಿತ-2).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 11ನೇ ಹಣಕಾಸು ಆಯೋಗದ ಯೋಜನೆಯಡಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ಗೋಳೂರು-ಮಚ್ಚೂರು ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿಯ ಮಾರ್ಪಡಿಸಿದ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 16.9.2003ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಇಂ: ಸನೀಮೈ: ನೀಶಾಖೆ: 9: 2001-02: 2440, ದಿನಾಂಕ: 16.9.2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.9.2003ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯರವರು ಮೈಸೂರು ಜಿಲ್ಲೆ, ಹೆಚ್.ಡಿ.ಕೋಟೆ ತಾಲ್ಲೂಕು ಗೋಳೂರು-ಮಚ್ಚೂರು ಏತ ನೀರಾವರಿ ಯೋಜನೆ ಪುನರುಜ್ಜೀವನ ಕಾಮಗಾರಿಯ ರೂ.61.00 ಲಕ್ಷಗಳ ಮಾರ್ಪಡಿಸಿದ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಸಲ್ಲಿಸಿದ್ದಾರೆ.

ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ತಾಲ್ಲೂಕಿನ ಗೋಳೂರು-ಮಚ್ಚೂರು ಏತ ನೀರಾವರಿ ಯೋಜನೆಯು ಈ ಹಿಂದೆ 119 ಎಕರೆ ಅಚ್ಚುಕಟ್ಟಿಗೆ ನೀರೊದಗಿಸಲು ಉದ್ದೇಶಿಸಿ ಲೋಕೋಪಯೋಗಿ ಇಲಾಖೆಯಿಂದ ಅನುಷ್ಠಾನಗೊಂಡು 1984ನೇ ಸಾಲಿನಲ್ಲಿ ಕಾರ್ಯಾರಂಭ ಮಾಡಿರುತ್ತದೆ. 1996ನೇ ಸಾಲಿನಲ್ಲಿ ಯೋಜನೆಯನ್ನು ಸಣ್ಣ ನೀರಾವರಿ ಇಲಾಖೆಗೆ ವಹಿಸಿದ್ದು, ದುರಸ್ಥಿಯಲ್ಲಿದ್ದ ಈ ಯೋಜನೆಯ ಪುನರುಜ್ಜೀವನ ಕಾಮಗಾರಿಗಾಗಿ 11.95 ಲಕ್ಷ ರೂ.ಗಳ ಅಂದಾಜಿಗೆ 2002-03ನೇ ಸಾಲಿನಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು, ಹಾಗೂ ತಾಂತ್ರಿಕ ಮಂಜೂರಾತಿಯನ್ನು 11ನೇ ಹಣಕಾಸು ಆಯೋಗದ ನಿಷ್ಕ್ರಿಯೆಗೊಂಡ ಹಾಗೂ ರೋಗಗ್ರಸ್ಥ ಏತ ನೀರಾವರಿ ಯೋಜನೆಯ ಪುನರುಜ್ಜೀವನ ಕಾರ್ಯಕ್ರಮದಡಿ ಮಂಜೂರಾತಿಯನ್ನು ನೀಡಿರುವುದಾಗಿ ಮುಖ್ಯ ಇಂಜಿನಿಯರ್‌ರವರು ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

ಮಂಜೂರಾದ ಅಂದಾಜಿನಲ್ಲಿ ನದಿಯ ಪಾತ್ರದಲ್ಲಿ ಆಗಮನ ಕಾಲುವೆ ಹಾಗೂ ಪಂಪ್‌ವೆಲ್ ನಿರ್ಮಿಸಿ 45 ಹೆಚ್. ಪಿ. ಪಂಪು ಮತ್ತು ಮೋಟಾರ್ ಅಳವಡಿಸಿದ್ದು, ಅಸ್ತಿತ್ವದಲ್ಲಿರುವ ರೈಸಿಂಗ್ ಮೇನ್ ಮೂಲಕ ಜಮೀನಿಗೆ ನೀರೊದಗಿಸಲು ಉದ್ದೇಶಿಸಲಾಗಿತ್ತು. ಆದರೆ ಅಧೀಕ್ಷಕ ಅಭಿಯಂತರರ ಪ್ರಸ್ತಾವನೆಯಂತೆ ಆಗಮನ ಕಾಲುವೆಯಲ್ಲಿ ಹೂಳು ತುಂಬಿಕೊಳ್ಳುವುದರಿಂದಲೂ ಮತ್ತು ಮಳೆಗಾಲದಲ್ಲಿ ಪಂಪು ಮತ್ತು ಮೋಟಾರನ್ನು ಬಿಚ್ಚಿಡುವುದು ಹಾಗೂ ಜೋಡಣೆ ಮಾಡುವುದು ಕಷ್ಟವಾಗುವುದಾಗಿ ಹಾಗೂ ಕಲ್ಲನ್ನು ಸಿಡಿಸುವಾಗ ಅಸ್ತಿತ್ವದಲ್ಲಿರುವ ಕಟ್ಟಡಗಳಿಗೆ ಹಾನಿ ಆಗುವ ಸಂಭವವಿರುವುದರಿಂದಲೂ ಈ ಯೋಜನೆಯಲ್ಲಿ ಅನುಮೋದಿತ ಅಂದಾಜಿನಂತೆ ಪ್ರಸ್ತಾಪಿಸಲಾಗಿರುವ ಅಂಶಗಳು ತಾಂತ್ರಿಕವಾಗಿ ಶಕ್ಯವಾಗಿರುವುದಿಲ್ಲವೆಂದು ಅಭಿಪ್ರಾಯ ಪಟ್ಟು, ತಾಂತ್ರಿಕ ಆವಶ್ಯಕತೆಗಳನ್ನು ಪೂರೈಸಲು ಅಂದಾಜನ್ನು ಈ ಕೆಳಕಂಡ ಅಂಶಗಳನ್ನು ಒಳಗೊಂಡಂತೆ ಮಾರ್ಪಡಿಸಲಾಗಿದೆ.

1. ನದಿಯ ಕನಿಷ್ಠ ನೀರಿನ ಮಟ್ಟಕ್ಕಿಂತ ಕೆಳಭಾಗದಲ್ಲಿ ಶೇಖರಣಾ ತೊಟ್ಟಿ ನಿರ್ಮಾಣ.
2. ಪಂಪ್‌ವೆಲ್ ನಿರ್ಮಾಣ
3. ಪಂಪ್ ಹೌಸ್ ನಿರ್ಮಾಣ
4. 45 ಹೆಚ್. ಪಿ. ಡೀಪ್ ವೆಲ್ ಟರ್ಬೈನ್ ಪ್ರಷರ್ ಪೈಪ್ ರೈಸಿಂಗ್ ಮೇನ್‌ಗೆ ಬದಲಾಗಿ ಮೆದು ಉಕ್ಕಿನ ಪೈಪ್‌ಗಳನ್ನು ಅಳವಡಿಸುವುದು.

ಮಾರ್ಪಡಿಸಿದ ಅಂದಾಜನ್ನು ದಿನಾಂಕ: 25.2.03ರ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆಯಲಾಗಿದೆ.

ಈ ಕಾಮಗಾರಿಯು 11ನೇ ಹಣಕಾಸು ಆಯೋಗದ 40.00 ಲಕ್ಷ ರೂ.ಗಳ ಅಂದಾಜು ಮೊತ್ತದೊಂದಿಗೆ ಸೇರಿದ್ದು, ಪರಿಷ್ಕೃತ ಅಂದಾಜು ಮೊತ್ತ ರೂ.61.00 ಲಕ್ಷ ರೂ.ಗಳಿಗೆ ಕೊರತೆ ಇರುವ 21.00 ಲಕ್ಷ ರೂ.ಗಳನ್ನು ಅನುಮೋದಿತ ಕ್ರಿಯಾ ಯೋಜನೆಯಡಿ ಉಳಿತಾಯವಾಗುವ ಮೊತ್ತದಲ್ಲಿ ಭರಿಸಲಾಗುವುದೆಂದು ತಿಳಿಸಿ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 64 ಏನೀಯೋ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳ ಹಿನ್ನೆಲೆಯಲ್ಲಿ 11ನೇ ಹಣಕಾಸು ಯೋಜನೆಯಡಿ ಪ್ರಸ್ತಾಪಿಸಿರುವ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ಗೋಳೂರು-ಮಚ್ಚೂರು ಏತ ನೀರಾವರಿ ಯೋಜನೆಯ ಪುನರುಜ್ಜೀವನ ಕಾಮಗಾರಿಯ ಮಾರ್ಪಡಿಸಿದ 61.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಈ ಕಾಮಗಾರಿಯ ವೆಚ್ಚವು ಅನುಮತಿ ನೀಡಿರುವ ಅಂದಾಜಿನ ಮೊತ್ತಕ್ಕಿಂತ ಯಾವುದೇ ಕಾರಣಕ್ಕೂ ಹೆಚ್ಚಾಗದಂತೆ ಎಚ್ಚರ ವಹಿಸತಕ್ಕದ್ದು.
2. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ಮೌಲ್ಯ ನಿರ್ಣಯ ಸಮಿತಿಯ ದಿನಾಂಕ: 25.2.2003ರ ಸಭೆಯ ನಡವಳಿಗಳಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2000, ದಿನಾಂಕ: 20.1.2003ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಜಿ. ಪ್ರಸಾದ್**

ಪಿಆರ್.1438 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ).